# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **34**

ಸದಸ್ಯರ ಹೆಸರು : ಶ್ರೀ ಪ್ರಕಾಶ ಕೆ. ರಾಥೋಡ್

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 21-09-2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರೋನಾ ವೈರಸ್ ಪ್ರಾರಂಭವಾದ ಸಮಯದಿಂದ ಇದುವರೆಗೂ ಕಾರ್ಮಿಕ ಇಲಾಖೆಯಿಂದ ಆಟೋ ಚಾಲಕರುಗಳಿಗೆ ಮತ್ತು ಇತರರಿಗೆ ನೀಡಿರುವ ಹಣ ಎಷ್ಟು; ಎಷ್ಟು ಅರ್ಜಿಗಳು ಬಂದಿವೆ; ಎಷ್ಟು ಬಾಕಿ ಇವೆ (ಸಂಪೂರ್ಣ ವಿವರ ನೀಡುವುದು)? | ಕೋವಿಡ್-19 ಲಾಕ್‌ಡೌನ್ ಹಿನ್ನೆಲೆಯಲ್ಲಿ, ರಾಜ್ಯದಲ್ಲಿನ ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರು ತಮ್ಮ ಆದಾಯವನ್ನು ಕಳೆದುಕೊಂಡಿರುವುದರಿಂದ, ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರಿಗೆ ಒಮ್ಮೆ ರೂ.5,000/-ಗಳ ಪರಿಹಾರ ಧನವನ್ನು ಘೋಷಿಸಲಾಗಿದ್ದು, ಈ ಸಂಬಂಧವಾಗಿ ಸೇವಾಸಿಂಧು ವೆಬ್ ಪೋರ್ಟಲ್ ಮೂಲಕ 2,45,844 ಅರ್ಜಿಗಳು ಸ್ವೀಕೃತವಾಗಿದ್ದು, ಇಲ್ಲಿಯವರೆಗೆ 2,15,155 ಫಲಾನುಭವಿಗಳ ಖಾತೆಗೆ ರೂ.5000/-ಗಳಂತೆ ಪರಿಹಾರ ಧನವನ್ನು ಜಮೆ ಮಾಡಲಾಗಿದೆ. ಉಳಿದ ಅರ್ಜಿಗಳು ಪರಿಶೀಲನೆಯಲ್ಲಿರುತ್ತವೆ.<br><br>ಕಾರ್ಮಿಕ ಇಲಾಖೆಯ ಅಧೀನದಲ್ಲಿರುವ ಈ ಕೆಳಗಿನ 2 ಮಂಡಳಿಗಳ ವತಿಯಿಂದ ಕರೋನಾ ವೈರಸ್ ಸಮಯದಲ್ಲಿ ನಿರ್ಮಾಣ ಹಾಗೂ ಇತರೆ ಕಾರ್ಮಿಕರಿಗೆ ಸಂಬಂಧಿಸಿದಂತೆ ಈ ಕೆಳಗಿನಂತೆ ಕ್ರಮ ಕೈಗೊಳ್ಳಲಾಗಿರುತ್ತದೆ.<br><br>1. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ**<br>ಕೊರೋನ ವೈರಸ್ ಪ್ರಾರಂಭವಾದ ಸಮಯದಿಂದ ರಾಜ್ಯದಲ್ಲಿ ನೋಂದಾಯಿತರಾದ ಕಟ್ಟಡ ಕಾರ್ಮಿಕರಿಗೆ ತಲಾ ರೂ.5,000/- ಗಳ ಪರಿಹಾರವನ್ನು ಸರ್ಕಾರ ಘೋಷಣೆ ಮಾಡಿರುತ್ತದೆ. ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಮಂಡಳಿಯಲ್ಲಿ ನೋಂದಾಯಿತರಾದ ಕಟ್ಟಡ ಕಾರ್ಮಿಕರ ಪೈಕಿ ದಿನಾಂಕ:30-06-2020 ರವರೆಗೆ 16,48,431 ನೋಂದಾಯಿತ ಕಟ್ಟಡ ಕಾರ್ಮಿಕರಿಗೆ ಸೌಲಭ್ಯವನ್ನು ನೀಡಲಾಗಿದೆ. ಜಿಲ್ಲಾವಾರು ವಿವರವನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ.<br><br>ಉಳಿದಂತೆ 5,29,588 ನೋಂದಾಯಿತ ಕಟ್ಟಡ ಕಾರ್ಮಿಕರು ಅಗತ್ಯ ದಾಖಲೆಗಳನ್ನು ಸಲ್ಲಿಸದಿರುವುದು ಹಾಗೂ ಇನ್ನಿತರೆ ತಾಂತ್ರಿಕ ಕಾರಣಗಳಿಂದಾಗಿ ರೂ.5,000/- ಮಂಜೂರು ಮಾಡುವ ಪ್ರಕ್ರಿಯೆಯು ಬಾಕಿಯಿರುತ್ತದೆ.<br><br>2. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ**<br>ಕ್ಷೌರಿಕ ಹಾಗೂ ಅಗಸ ವೃತ್ತಿಯಲ್ಲಿ ತೊಡಗಿರುವ ಅಸಂಘಟಿತ ವಲಯದ ಕಾರ್ಮಿಕರಿಗೆ ತಲಾ ರೂ.5,000/-ಗಳ ಒಂದು ಬಾರಿಯ ನೆರವನ್ನು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಪಾವತಿಸಲಾಗುತ್ತಿದೆ. |

| | | |
|---|---|---|
| | | ಅಗಸ ವೃತ್ತಿ ನಿರ್ವಹಿಸುತ್ತಿರುವ 74,782 ಮತ್ತು ಕ್ಷೌರಿಕ ವೃತ್ತಿ ನಿರ್ವಹಿಸುತ್ತಿರುವ 66,820 ಅರ್ಜಿದಾರರು ಸೇರಿದಂತೆ ಒಟ್ಟು 1,41,602 ಅರ್ಜಿಗಳನ್ನು ಅರ್ಜಿ ಸಲ್ಲಿಸಲು ಅಂತಿಮ ದಿನಾಂಕವಾದ 15-08-2020 ರವರೆಗೆ ಸ್ವೀಕರಿಸಲಾಗಿದೆ.<br><br>ಫಲಾನುಭವಿಗಳಿಂದ ಸ್ವೀಕೃತವಾದ ಅರ್ಜಿಗಳಲ್ಲಿ ಈವರೆಗೆ 1,14,388 ಅರ್ಜಿದಾರರಿಗೆ ತಲಾ ರೂ.5,000/-ಗಳಂತೆ ಒಟ್ಟು ರೂ.57.19 ಕೋಟಿ ಮೊತ್ತವನ್ನು ಅರ್ಹ ಫಲಾನುಭವಿಗಳ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮೂಲಕ ವರ್ಗಾಯಿಸಲಾಗಿದೆ.<br><br>ಯೋಜನೆಯ ಷರತ್ತುಗಳನ್ನು ಪೂರ್ಣಗೊಳಿಸದ 1924 ಅರ್ಜಿಗಳನ್ನು ತಿರಸ್ಕರಿಸಲಾಗಿದ್ದು, ತಾಂತ್ರಿಕ ಕಾರಣಗಳು ಸೇರಿದಂತೆ ಷರತ್ತುಗಳನ್ನು ಪೂರೈಸದ ಹಾಗೂ ಕ್ರಮಬದ್ಧವಲ್ಲದ 25,290 ಅರ್ಜಿಗಳ ಮರು ಪರಿಶೀಲನೆ ನಡೆಸಲಾಗುತ್ತಿದ್ದು, ಅರ್ಹ ಫಲಾನುಭವಿಗಳು ಕಂಡು ಬಂದಲ್ಲಿ ನೆರವಿನ ಮೊತ್ತವನ್ನು ಪಾವತಿಸಲು ಕ್ರಮಕೈಗೊಳ್ಳಲಾಗುವುದು. |
| ಆ) | ಕಾರ್ಮಿಕ ಇಲಾಖೆಯಿಂದ ಯಾವ ಯಾವ ಯೋಜನೆಗಳಿಗೆ ಧನ ಸಹಾಯ ಮಾಡಲಾಗಿದೆ: (ವಿವರ ನೀಡುವುದು) | ಕಾರ್ಮಿಕ ಇಲಾಖೆ ಅಧೀನದಲ್ಲಿ ಬರುವ ಮಂಡಳಿಗಳ ಮೂಲಕ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಕಾರ್ಮಿಕರ ಸಾಮಾಜಿಕ ಹಾಗೂ ಆರ್ಥಿಕ ಬಲವರ್ಧನೆಯ ದೃಷ್ಠಿಯಿಂದ ಹಲವಾರು ಯೋಜನೆಗಳನ್ನು ರೂಪಿಸಿ ಜಾರಿಗೊಳಿಸಲಾಗುತ್ತಿದ್ದು, ವಿವರಗಳು ಈ ಕೆಳಕಂಡಂತೆ ಇರುತ್ತವೆ.<br><br>**1] ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ** ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸುತ್ತಿದ್ದು, ಅವುಗಳ ವಿವರಗಳನ್ನು **ಅನುಬಂಧ-2** ರಲ್ಲಿ ನೀಡಿದೆ.<br><br>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯು ನಿರ್ಮಾಣ ಕಾಮಗಾರಿಗಳಿಂದ ಸಂಗ್ರಹಿಸುವ ಸುಂಕ ಮೊತ್ತದಿಂದ ನಿರ್ಮಾಣ ಕಾರ್ಮಿಕರ ಕಲ್ಯಾಣ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ. ಈ ಯೋಜನೆಗಳಡಿ ಸಹಾಯಧನ ವಿತರಿಸಿರುವ ವಿವರವನ್ನು **ಅನುಬಂಧ-3** ರಲ್ಲಿ ನೀಡಿದೆ.<br><br>**2] ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ** ಅಸಂಘಟಿತ ವಲಯದ ಕಾರ್ಮಿಕರಿಗೆ ಸಾಮಾಜಿಕ ಹಾಗೂ ಆರ್ಥಿಕ ಭದ್ರತೆ ಒದಗಿಸುವ ಈ ಕೆಳಕಂಡ ಯೋಜನೆಗಳನ್ನು ಜಾರಿಗೊಳಿಸಲಾಗುತ್ತಿದೆ. ರಾಜ್ಯ ಸರ್ಕಾರವು ನೀಡುವ ಅನುದಾನವನ್ನು ಬಳಸಿಕೊಂಡು ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.<br><br>(1) **ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-** ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರಿಗೆ ಸಂಬಂಧಪಟ್ಟಂತೆ ಈ ಯೋಜನೆಯಡಿ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br><br>(ಅ) **ಅಪಘಾತ ಪರಿಹಾರ:-** ಅಪಘಾತದಿಂದಾದ ಮರಣ ಪ್ರಕರಣಗಳಲ್ಲಿ ರೂ.5 ಲಕ್ಷ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ರೂ.2 ಲಕ್ಷ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ ರೂ.1 ಲಕ್ಷದವರೆಗೂ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುವುದು. |

| | | |
|---|---|---|
| | | ಯೋಜನೆ ಪ್ರಾರಂಭವಾದಾಗಿನಿಂದ ಈವರೆಗೆ 697 ಅಪಘಾತ ಪ್ರಕರಣಗಳಲ್ಲಿ ರೂ.18,66,12,620/- ಗಳ ಪರಿಹಾರ ವಿತರಿಸಲಾಗಿದೆ.<br><br>(ಆ) **ಶೈಕ್ಷಣಿಕ ಧನ ಸಹಾಯ:-** ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿ ಪೂರ್ವ ವ್ಯಾಸಂಗದವರೆಗೆ ವಾರ್ಷಿಕ 10,000/- ರೂ.ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ.<br><br>ಈವರೆಗೆ 321 ವಿದ್ಯಾರ್ಥಿಗಳಿಗೆ ವಾರ್ಷಿಕ ತಲಾ. ರೂ.10.000 ಗಳಂತೆ ಒಟ್ಟು ರೂ.321,00,000/-ಗಳ ಶೈಕ್ಷಣಿಕ ಸಹಾಯ ಧನ ವಿತರಿಸಲಾಗಿದೆ.<br><br>(ಇ) **ಶ್ರಮ ಸಮ್ಮಾನ ಪ್ರಶಸ್ತಿ :**<br><br>➢ ಪ್ರತಿ ವರ್ಷ ಮಾರ್ಚ್ 01 ರಂದು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಮಿಕ ಸಮ್ಮಾನ ದಿನಾಚರಣೆ ಆಚರಿಸಿ, ಉತ್ತಮ ಹಾಗೂ ಸುರಕ್ಷತಾ ಚಾಲನೆ ಮಾಡಿದ ತ್ರಿಚಕ್ರ ಹಾಗೂ ನಾಲ್ಕು ಚಕ್ರದ ವಾಹನ ಚಾಲಕರಿಗೆ ಪ್ರತಿ ಜಿಲ್ಲೆಗೆ ಪ್ರತ್ಯೇಕವಾಗಿ ಪ್ರಥಮ, ದ್ವಿತೀಯ ಹಾಗೂ ತೃತೀಯ ಪ್ರಶಸ್ತಿ ಮತ್ತು 8 ವಿಶೇಷ ಪುರಸ್ಕಾರ ಪ್ರಶಸ್ತಿಗಳು ಸೇರಿ ಒಟ್ಟು ರಾಜ್ಯಾದ್ಯಂತ 660 ಚಾಲಕರಿಗೆ "ಶ್ರಮ ಸಮ್ಮಾನ ಪ್ರಶಸ್ತಿ" ನೀಡಿ ಗೌರವಿಸಲಾಗುತ್ತಿದೆ.<br>➢ ಪ್ರಥಮ ಪ್ರಶಸ್ತಿಯು ರೂ. 15,000 ಗಳ ಮೌಲ್ಯದ ಚಿನ್ನದ ಪದಕ, ದ್ವಿತೀಯ ಪ್ರಶಸ್ತಿಯು ರೂ.10,000 ದ ಮೌಲ್ಯದ ಬೆಳ್ಳಿ ಪದಕ ಹಾಗೂ ತೃತೀಯ ಪ್ರಶಸ್ತಿಯು ರೂ.8,000 ದ ಮೌಲ್ಯದ ಬೆಳ್ಳಿ ಪದಕ ಹೊಂದಿದ್ದು, ವಿಶೇಷ ಪುರಸ್ಕಾರವು ರೂ.1,000/-ಗಳ ನಗದು ಬಹುಮಾನ ಹಾಗೂ ಪ್ರಶಂಸಾ ಪತ್ರವನ್ನು ಹೊಂದಿರುತ್ತದೆ.<br><br>**(ಈ) ಅಪಘಾತ ಜೀವ ರಕ್ಷಕ:-** ಅಪಘಾತಕ್ಕೊಳಗಾದ ಗಾಯಾಳುಗಳನ್ನು ರಕ್ಷಿಸುವ ಸ್ವಯಂಸೇವಕರನ್ನು ಸೃಷ್ಟಿಸುವ ಉದ್ದೇಶದಿಂದ ಅಪಘಾತ ಜೀವರಕ್ಷಕ ಕಾರ್ಯಕ್ರಮದಡಿ ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿಯನ್ನು ನೀಡಲಾಗುತ್ತಿದೆ.<br><br>ಈವರೆಗೆ ಒಟ್ಟು 38,569 ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿ ನೀಡಿ ಅಪಘಾತ ಜೀವರಕ್ಷಕರನ್ನಾಗಿ ಸಜ್ಜುಗೊಳಿಸಿದೆ. ಇದಕ್ಕಾಗಿ ಸರ್ಕಾರವು ಒಟ್ಟು ರೂ.4.69 ಕೋಟಿಗಳನ್ನು ಖರ್ಚು ಮಾಡಿರುತ್ತದೆ.<br><br>(2) **ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-**<br><br>**(ಅ) "ಸ್ಮಾರ್ಟ್ ಕಾರ್ಡ್":-** ಯೋಜನೆಯಡಿ ಅಸಂಘಟಿತ ವಲಯದ ಕಾರ್ಮಿಕ ವರ್ಗಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಮಂಡಕ್ಕಿ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದೆ. ಇದಕ್ಕಾಗಿ ಸರ್ಕಾರವು ಒಟ್ಟು ರೂ.1.03 ಕೋಟಿಗಳನ್ನು ಸರ್ಕಾರದಿಂದ ಬಿಡುಗಡೆ ಮಾಡಿದೆ. |

| | | |
|---|---|---|
| | | (ಆ) ಶ್ರಮ ಸಮ್ಮಾನ ಪ್ರಶಸ್ತಿ:<br>➢ ಪ್ರತಿ ವರ್ಷ ಮಾರ್ಚ್ 01 ರಂದು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಮಿಕ ಸಮ್ಮಾನ ದಿನಾಚರಣೆ ಆಚರಿಸಿ, ಅಸಂಘಟಿತ ವಲಯದ ಕಾರ್ಮಿಕ ವರ್ಗಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ" ವಲಯಗಳಲ್ಲಿ ವಿಶೇಷ ಸಾಧನೆ ಮಾಡಿದ ಕಾರ್ಮಿಕರನ್ನು ಗುರುತಿಸಿ, ಪ್ರತಿಯೊಂದು ಜಿಲ್ಲೆಗೆ ಪ್ರತಿಯೊಂದು ವಲಯಕ್ಕೆ ಪ್ರಥಮ, ದ್ವಿತೀಯ ಹಾಗೂ ತೃತೀಯ ಪ್ರಶಸ್ತಿ ಮತ್ತು 8 ವಿಶೇಷ ಪುರಸ್ಕಾರ ಪ್ರಶಸ್ತಿಗಳು ಸೇರಿ ಒಟ್ಟು 3630 ಕಾರ್ಮಿಕರಿಗೆ "ಶ್ರಮ ಸಮ್ಮಾನ ಪ್ರಶಸ್ತಿ" ನೀಡಿ ಗೌರವಿಸಲಾಗುತ್ತಿದೆ.<br>➢ ಪ್ರಥಮ ಪ್ರಶಸ್ತಿಯು ರೂ.15,000 ಗಳ ಮೌಲ್ಯದ ಚಿನ್ನದ ಪದಕ, ದ್ವಿತೀಯ ಪ್ರಶಸ್ತಿಯು ರೂ.10,000 ದ ಮೌಲ್ಯದ ಬೆಳ್ಳಿ ಪದಕ ಹಾಗೂ ತೃತೀಯ ಪ್ರಶಸ್ತಿಯು ರೂ.8,000ದ ಮೌಲ್ಯದ ಬೆಳ್ಳಿ ಪದಕ ಹೊಂದಿದ್ದು, ವಿಶೇಷ ಪುರಸ್ಕಾರವು ರೂ.1,000/-ಗಳ ನಗದು ಬಹುಮಾನ ಹಾಗೂ ಪ್ರಶಂಸಾ ಪತ್ರವನ್ನು ಹೊಂದಿರುತ್ತದೆ.<br><br>(ಇ) **ಕಾರ್ಮಿಕ ಸೇವಾ ಕೇಂದ್ರ :-**<br>➢ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 9ರನ್ವಯ ಫಲಾನುಭವಿಗಳಲ್ಲಿ ಅಸಂಘಟಿತ ಕಾರ್ಮಿಕರಿಗೆ ಲಭ್ಯವಿರುವ ಎಲ್ಲಾ ಯೋಜನೆಗಳ ಕುರಿತು ಮಾಹಿತಿ ನೀಡಲು, ಯೋಜನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಅವಶ್ಯಕವಿರುವ ದಾಖಲಾತಿಗಳನ್ನು ಸಿದ್ಧಪಡಿಸಲು ಹಾಗೂ ನಿಗಧಿಪಡಿಸಿದ ಅರ್ಜಿ ನಮೂನೆಗಳನ್ನು ಭರ್ತಿ ಮಾಡಿ ಸಂಬಂಧಪಟ್ಟವರಿಗೆ ರವಾನಿಸಲು ಸಹಾಯವಾಗುವಂತೆ ಪ್ರತಿ ತಾಲ್ಲೂಕಿಗೆ ಒಂದರಂತೆ ರಾಜ್ಯದ ಎಲ್ಲಾ 175 ತಾಲ್ಲೂಕುಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ಹಾಗೂ ಬೆಂಗಳೂರು ವ್ಯಾಪ್ತಿಯಲ್ಲಿ 6 ಕಾರ್ಮಿಕ ಸೇವಾ ಕೇಂದ್ರಗಳು ಸೇರಿ ಒಟ್ಟು 181 ಕಾರ್ಮಿಕ ಸೇವಾ ಕೇಂದ್ರಗಳನ್ನು ತೆರೆಯಲು ತೀರ್ಮಾನಿಸಲಾಗಿದ್ದು, ಈಗಾಗಲೇ 159 ತಾಲ್ಲೂಕುಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.<br><br>ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿಗಳು ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ಕುರಿತು ಮಾಹಿತಿ, ಸಹಾಯ ಹಾಗೂ ಸೌಲಭ್ಯಗಳನ್ನು, ಸದರಿ ಸೇವಾ ಕೇಂದ್ರಗಳಲ್ಲಿ ಕಾರ್ಮಿಕ ಬಂಧುಗಳ ಮೂಲಕ ಪಡೆಯಲು ವ್ಯವಸ್ಥೆ ಕಲ್ಪಿಸಲಾಗಿದೆ.<br><br>**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ** ಈ ಮಂಡಳಿಗೆ ವಂತಿಗೆ ಪಾವತಿ ಮಾಡುವ ವಿವಿಧ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ಕಾರ್ಮಿಕ ಕಲ್ಯಾಣ ಯೋಜನೆಯಡಿ ವಿವಿಧ ಸೌಲಭ್ಯ ನೀಡಲಾಗುತ್ತಿದೆ. ಈ ಯೋಜನೆಗಳ ಅನುಷ್ಠಾನಕ್ಕಾಗಿ ರಾಜ್ಯ ಸರ್ಕಾರವು ರೂ. 7.18 ಕೋಟಿಗಳನ್ನು ಒದಗಿಸಿರುತ್ತದೆ.<br><br>ಮಂಡಳಿಯಿಂದ ನೀಡಲಾಗುವ ಸೌಲಭ್ಯಗಳು ಹಾಗೂ 2019-20ನೇ ಸಾಲಿನಲ್ಲಿ ನೀಡಿರುವ ಕಲ್ಯಾಣ ಯೋಜನೆಗಳ ವಿವರಗಳನ್ನು ಅನುಬಂಧ-4(ಎ) ಮತ್ತು 4(ಬಿ) ರಲ್ಲಿ ಲಗತ್ತಿಸಿದೆ. |

| | | |
|---|---|---|
| ಇ) | ಅಸಂಘಟಿತ ಕಾರ್ಮಿಕರಿಗೆ ಜಾರಿಗೆ ತಂದಿರುವ ಪಿಂಚಣಿ ಯೋಜನೆ ಜಾರಿಯಲ್ಲಿದೆಯೇ: ಅಸಂಘಟಿತ ಸಾರಿಗೆ ನೌಕರರಿಗೆ ಈ ಯೋಜನೆ ಅನ್ವಯಿಸುವುದಿಲ್ಲವೇ: ಪಿಂಚಣಿ ಯೋಜನೆ ಅನ್ವಯ ನೋಂದಾಯಿತ ಕಾರ್ಮಿಕರ ಸಂಖ್ಯೆ ಎಷ್ಟು? (ವಿವರ ನೀಡುವುದು) | 2018-19ನೇ ಸಾಲಿನಲ್ಲಿ ಕರ್ನಾಟಕ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಅಸಂಘಟಿತ ಕಾರ್ಮಿಕರಿಗೆ ವಂತಿಕೆ ಆಧಾರಿತ ಪಿಂಚಣಿ ಯೋಜನೆಯನ್ನು ಜಾರಿಗೆ ತರಲು ಉದ್ದೇಶಿಸಲಾಗಿತ್ತು. ಆದರೆ, ಕೇಂದ್ರ ಸರ್ಕಾರವು ಅಸಂಘಟಿತ ಕಾರ್ಮಿಕರು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3000/- ಪಿಂಚಣಿ ಒದಗಿಸುವ "ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆಯನ್ನು" ಜಾರಿಗೆ ತಂದ ಹಿನ್ನೆಲೆಯಲ್ಲಿ ಮಂಡಳಿಯು ಉದ್ದೇಶಿಸಲಾದ ಪಿಂಚಣಿ ಯೋಜನೆಯನ್ನು ಕೈಬಿಡಲಾಗಿದೆ.<br><br>ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆಯು (ಪಿಎಂ-ಎಸ್‌ವೈಎಂ) ಅಸಂಘಟಿತ ಖಾಸಗಿ ವಾಣಿಜ್ಯ ಸಾರಿಗೆ ನೌಕರರಿಗೂ ಸಹ ಅನ್ವಯವಾಗಲಿದೆ. ಈ ಯೋಜನೆಯಡಿ ರಾಜ್ಯದಲ್ಲಿ ಇಲ್ಲಿಯವರೆಗೆ ಒಟ್ಟು 95507 ಫಲಾನುಭವಿಗಳನ್ನು ನೋಂದಾಯಿಸಲಾಗಿದೆ. ಜಿಲ್ಲಾವಾರು ವಿವರಗಳನ್ನು **ಅನುಬಂಧ-5** ರಲ್ಲಿ ಲಗತ್ತಿಸಿದೆ. |

ಟಿಡಿ 73 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು

ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಪ್ರಕಾಶ್ ರಾಥೋಡ್ (ನಾಮ ನಿರ್ದೇಶನ ಹೊಂದಿದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 34ಕ್ಕೆ

ಅನುಬಂಧ-01

ಕೋವಿಡ್-19 ಕಾರಣದಿಂದ ಆರ್ಥಿಕ ಸಂಕಷ್ಟಕ್ಕೊಳಗಾದ ಮಂಡಳಿಯ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ದಿನಾಂಕ: 09-09-2020ರವರೆಗೆ ರೂ. 5000/-ಗಳ ಸಹಾಯಧನ ಪಾವತಿಸಿದ ಜಿಲ್ಲಾವಾರು ವಿವರಗಳು.

| ಕ್ರ.ಸಂ | ಜಿಲ್ಲೆ | ಮಂಡಳಿಯಿಂದ ಡಿಬಿಟಿ ಹಾಗೂ ಆಧಾರ ಮೂಲಕ ಸಹಾಯಧನ ಪಾವತಿಸಿದ ಫಲಾನುಭವಿಗಳ ಸಂಖ್ಯೆ | ಮಂಡಳಿಯಿಂದ ನೆಫ್ಟ್ ಮೂಲಕ ಪಾವತಿಸಿದ ಫಲಾನುಭವಿಗಳ ಸಂಖ್ಯೆ | ಕಾರ್ಮಿಕ ಅಧಿಕಾರಿಗಳ ಮೂಲಕ ಪಾವತಿಸಿದ ಫಲಾನುಭವಿಗಳ ಸಂಖ್ಯೆ |
|---|---|---|---|---|
| 1 | ಬಾಗಲಕೋಟೆ | 15579 | 3393 | 10555 |
| 2 | ಬೆಳಗಾವಿ | 41674 | 11281 | 17026 |
| 3 | ಬಳ್ಳಾರಿ | 45372 | 4036 | 33433 |
| 4 | ಬೆಂಗಳೂರು | 36357 | 5378 | 42032 |
| 5 | ಬೀದರ | 43651 | 5117 | 22846 |
| 6 | ವಿಜಯಪುರ | 17613 | 3773 | 24239 |
| 7 | ಚಾಮರಾಜನಗರ | 40290 | 1117 | 13252 |
| 8 | ಚಿಕ್ಕಬಳ್ಳಾಪುರ | 15980 | 1031 | 6735 |
| 9 | ಚಿಕ್ಕಮಗಳೂರು | 19550 | 9040 | 6139 |
| 10 | ಚಿತ್ರದುರ್ಗ | 60049 | 3927 | 14556 |
| 11 | ದಾವಣಗೆರೆ | 58869 | 3194 | 22245 |
| 12 | ಗದಗ | 11999 | 5102 | 6748 |
| 13 | ಹಾಸನ | 54320 | 3401 | 15182 |
| 14 | ಹಾವೇರಿ | 13247 | 11138 | 19991 |
| 15 | ಧಾರವಾಡ | 48299 | 7813 | 20973 |
| 16 | ಕಲಬುರಗಿ | 40707 | 6335 | 37875 |
| 17 | ಉತ್ತರ ಕನ್ನಡ | 47485 | 13792 | 17664 |
| 18 | ಕೋಲಾರ | 44575 | 726 | 21288 |
| 19 | ಕೊಪ್ಪಳ | 65794 | 5757 | 5348 |
| 20 | ಕೊಡಗು | 951 | 468 | 1443 |
| 21 | ಮಂಡ್ಯ | 24824 | 1643 | 14622 |
| 22 | ದಕ್ಷಿಣ ಕನ್ನಡ | 35657 | 7593 | 13132 |
| 23 | ಮೈಸೂರು | 34030 | 2852 | 28120 |
| 24 | ರಾಯಚೂರು | 38789 | 2080 | 13279 |
| 25 | ರಾಮನಗರ | 9638 | 1059 | 18393 |
| 26 | ಶಿವಮೊಗ್ಗ | 92815 | 7055 | 13569 |
| 27 | ತುಮಕೂರು | 23338 | 2317 | 15527 |
| 28 | ಉಡುಪಿ | 17430 | 7409 | 7759 |
| 29 | ಯಾದಗಿರಿ | 15774 | 4269 | 7708 |
| | **ಒಟ್ಟು** | **10,14,656** | **142096** | **491679** |
| | ಒಟ್ಟು ಕಾರ್ಮಿಕರು | **16,48,431** | | |
| | ಒಟ್ಟು ವಿತರಿಸಿದ ಮೊತ್ತ | **824,21,55,000** | | |

ಸಂಧ್ಯಾ ಎಲ್. ನಾಯಕ್
ಸರ್ಕಾರದ ಉಪ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

## ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಪ್ರಕಾಶ್ ರಾಥೋಡ್ (ನಾಮ ನಿರ್ದೇಶನ ಹೊಂದಿದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 34ಕ್ಕೆ

## ಅನುಬಂಧ-02

### ಕನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿವತಿಯಿಂದ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು

1. ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.2,000/-
2. ಕುಟುಂಬ ಪಿಂಚಣಿ ಸೌಲಭ್ಯ: ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ
5. ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ: ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ
6. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/- ದವರೆಗೆ ಮುಂಗಡ ಸೌಲಭ್ಯ
7. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ ರೂ. 30,000/- ಮತ್ತು ಗಂಡು ಮಗುವಿನ ಜನನಕ್ಕೆ ರೂ.20,000/-
8. ಶಿಶು ಪಾಲನಾ ಸೌಲಭ್ಯ:
9. ಅಂತ್ಯಕ್ರಿಯೆ ವೆಚ್ಚ : ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
10. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| 1. | ನರ್ಸರಿ | 3,000 | 4,000 |
| 2. | 1 ರಿಂದ 4ನೇ ತರಗತಿ | 3,000 | 4,000 |
| 3. | 5 ರಿಂದ 8ನೇ ತರಗತಿ | 5,000 | 6,000 |
| 4. | 9 ಹಾಗೂ 10ನೇ ತರಗತಿ | 10,000 | 11,000 |
| 5. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| 6. | ಐಟಿಐ | 12,000 | 15,000 |
| 7. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| 8. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಪ್ರತಿ ವರ್ಷಕ್ಕೆ | 20,000 | 25,000 |
| 9. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಪ್ರತಿ ವರ್ಷಕ್ಕೆ | 25,000 | 30,000 |
| 10. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಪ್ರತಿ ವರ್ಷಕ್ಕೆ | 40,000 | 50,000 |
| 11. | ಡಿಪ್ಲೋಮಾ | 15,000 | 20,000 |
| 12. | ಎಂ.ಟೆಕ್ / ಎಂ.ಇ | 30,000 | 35,000 |
| 13. | ಎಂ.ಡಿ (ವೈದ್ಯಕೀಯ) | 45,000 | 55,000 |
| 14. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

ಸಂಧ್ಯಾ ಎಲ್. ನಾಯಕ್
ಸರ್ಕಾರದ ಉಪ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

11. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/-** ರಿಂದ **ರೂ.10,000/-**ವರೆಗೆ
12. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/-**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/- ಮತ್ತು** ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**
13. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯುಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-**ವರೆಗೆ
14. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**
15. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್
16. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
17. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ ( ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)
18. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯಧನ.

ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಪ್ರಕಾಶ್ ರಾಥೋಡ್ (ನಾಮ ನಿರ್ದೇಶನ ಹೊಂದಿದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 34 ಕ್ಕೆ

## ಅನುಬಂಧ-3

**2007 ರಿಂದ ಆಗಸ್ಟ್-2020 ರವರೆಗೆ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳಡಿಯಲ್ಲಿ ವಿತರಿಸಲಾದ ವರ್ಷವಾರು ಸೌಲಭ್ಯಗಳ ವಿವರಗಳು**

| ಸೌಲಭ್ಯಗಳ ವಿವರ | 2007-08 ರಿಂದ 2012-13 ರವರೆಗೆ | | 2013-14 ರಿಂದ 2017-18 ರವರೆಗೆ | | 2018-19 | | 2019-20 | | 2020-21 | | ಒಟ್ಟು | |
|---|---|---|---|---|---|---|---|---|---|---|---|---|
| | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| ಶೈಕ್ಷಣಿಕ ಧನಸಹಾಯ | 10,896 | 27,679,600 | 227,489 | 1,038,126,292 | 95,637 | 533,279,365 | 125,403 | 724,788,917 | 38,307 | 271,704,560 | 497,732 | 2,595,578,734 |
| ಮದುವೆ ಧನಸಹಾಯ | 2,126 | 15,160,000 | 23,514 | 1,161,415,000 | 11,380 | 475,875,000 | 10,966 | 453,596,000 | 4,039 | 99,990,000 | 52,025 | 2,206,036,000 |
| ಅಂತ್ಯ ಸಂಸ್ಕಾರಕ್ಕೆ ವೆಚ್ಚ | 1,376 | 20,921,000 | 6,368 | 328,454,619 | 2,208 | 117,282,000 | 3,674 | 198,641,000 | 1,077 | 58,423,000 | 14,703 | 723,721,619 |
| ಪ್ರಮುಖ ವೈದ್ಯಕೀಯ | 233 | 8,104,269 | 2,272 | 63,982,540 | 530 | 12,829,473 | 778 | 22,668,307 | 319 | 11,187,038 | 4,132 | 118,771,627 |
| ಅಪಘಾತ ಪರಿಹಾರ | 195 | 14,777,740 | 185 | 25,574,260 | 58 | 13,781,000 | 116 | 31,957,000 | 79 | 9,980,000 | 633 | 96,070,000 |
| ಹೆರಿಗೆ ಧನಸಹಾಯ | 365 | 2,192,000 | 1,677 | 24,721,500 | 552 | 9,160,000 | 572 | 11,930,174 | 25 | 465,000 | 3,191 | 48,468,674 |
| ವೈದ್ಯಕೀಯ ವೆಚ್ಚ | 779 | 742,750 | 268 | 565,048 | 192 | 5,592,698 | 95 | 2,019,557 | 122 | 2,135,740 | 1,456 | 11,055,793 |
| ಉಪಕರಣ ಖರೀದಿಗೆ ಸಾಲ | 3 | 14,890 | 17 | 85,000 | 0 | 0 | 0 | 0 | 0 | 0 | 20 | 99,890 |

| | | | | | | | | | | | |
|---|---|---|---|---|---|---|---|---|---|---|---|
| ಪಿಂಚಣಿ ಸೌಲಭ್ಯ | 0 | 0 | 759 | 9,131,000 | 520 | 12,052,000 | 627 | 23,026,000 | 241 | 12,974,000 | 2,147 | 57,183,000 |
| ದುರ್ಬಲತೆ ಪಿಂಚಣಿ | 0 | 0 | 11 | 1,608,000 | 7 | 1,214,000 | 18 | 2,999,000 | 5 | 1,130,000 | 41 | 6,951,000 |
| ಅನಿಲ ಭಾಗ್ಯ | 0 | 0 | 0 | 20,000,000 | 4,055 | 0 | 0 | 0 | 0 | 0 | 4,055 | 20,000,0 |
| ಶ್ರಮ ಸಾಮರ್ಥ್ಯ | 0 | 0 | 1,854 | 83,995,481 | 3,157 | 56,972,953 | 623 | 90,170,239 | 0 | 0 | 5,634 | 231,138, |
| ಬಿಎಂಟಿಸಿ ಬಸ್ ಪಾಸ್ | 0 | 0 | 0 | 52,479,000 | 1,602 | 0 | 2,996 | 594,300 | 0 | 0 | 4,598 | 53,073,300 |
| ವಸತಿ ಸೌಲಭ್ಯ | 0 | 0 | 0 | 0 | 0 | 0 | 5,129 | 760,000,000 | 0 | 0 | 5,129 | 760,000,000 |
| ಶಿಶು ಪಾಲನಾ ಕೇಂದ್ರಗಳ ಸ್ಥಾಪನೆ | 0 | 0 | 0 | 0 | 0 | 0 | 501 | 3,000,000 | 0 | 2,000,000 | 501 | 5,000,000 |
| ಒಟ್ಟು | **15,973** | **8,95,92,249** | **2,64,414** | **281,01,37,740** | **1,19,898** | **123,80,38,489** | **1,51,498** | **232,53,90,494** | **44,214** | **46,99,89,338** | **5,95,997** | **693,31,48,310** |

ಸಂಧ್ಯಾ ಎಲ್. ನಾಯಕ್
ಸರ್ಕಾರದ ಉಪ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಪ್ರಕಾಶ್ ರಾಥೋಡ್ (ನಾಮ ನಿರ್ದೇಶನ ಹೊಂದಿದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 34 ಕ್ಕೆ

# ಅನುಬಂಧ-4(ಎ)

## ಕಾರ್ಮಿಕ ಕಲ್ಯಾಣ ಯೋಜನೆಗಳ ಅಡಿಯಲ್ಲಿ ನೀಡುವ ಧನ ಸಹಾಯದ ವಿವರಗಳು

1. **ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ** : ಕನಿಷ್ಠ **ರೂ. 3,000/-**ಗಳಿಂದ ಗರಿಷ್ಠ **ರೂ. 10,000/-** ವರೆಗೆ.

2. **ಕಾರ್ಮಿಕರಿಗೆ ವೈದ್ಯಕೀಯ ನೆರವು** : ಕನಿಷ್ಠ **ರೂ. 500/-** ಗಳಿಂದ ಗರಿಷ್ಠ **ರೂ.10,000/-** ವರೆಗೆ.

3. **ಕಾರ್ಮಿಕರ ಅಪಘಾತ ಧನ ಸಹಾಯ** : ಕನಿಷ್ಠ **ರೂ. 1,000/-** ಗಳಿಂದ ಗರಿಷ್ಠ **ರೂ 3,000/-** ವರೆಗೆ.

4. **ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ : ರೂ.5,000/-**

5. **ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರ ಹಮ್ಮಿಕೊಳ್ಳುವ ಟ್ರೇಡ್ ಯೂನಿಯನ್/ಸಂಸ್ಥೆಗಳಿಗೆ ಧನಸಹಾಯ :** ಗರಿಷ್ಠ **ರೂ. 30,000/-**

6. **ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಳ್ಳುವ ನೊಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ :** ಗರಿಷ್ಠ **ರೂ. 50,000/-** .

ಸಂಧ್ಯಾ ಎಲ್. ನಾಯಕ್
ಸರ್ಕಾರದ ಉಪ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

## ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಪ್ರಕಾಶ್ ರಾಥೋಡ್ (ನಾಮ ನಿರ್ದೇಶನ ಹೊಂದಿದವರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 34 ಕ್ಕೆ

## ಅನುಬಂಧ–4(ಬಿ)

| ಕ್ರ.ಸಂ | ವರ್ಷ | 2019–20 | |
|---|---|---|---|
| 1 | ಯೋಜನೆಗಳ ವಿವರ | ಫಲಾನುಭವಿ ಸಂಖ್ಯೆ | ಮೊತ್ತ ರೂ. |
| 2 | ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ | 26,257 | 10,51,98,000 |
| 3 | ವೈದ್ಯಕೀಯ ನೆರವು | 5 | 45,252 |
| 4 | ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ. | 295 | 14,75,000 |
| 5 | ವೈದ್ಯಕೀಯ ತಪಾಸಣಾ ಶಿಬಿರ | 400 (2 ಸಂಘಟನೆ) | 60,000 |
| 6 | ವಾರ್ಷಿಕ ಕ್ರೀಡಾ ಚಟುವಟಿಕೆ | 600 (2 ಸಂಘಟನೆ) | 1,00,000 |
| 7 | **ವಾರ್ಷಿಕ ಕ್ರೀಡಾ ಚಟುವಟಿಕೆ** | **600 (2 ಸಂಘಟನೆ)** | **1,00,000** |
| | ಒಟ್ಟು | 27,557 | 10,68,78,252 |

ಸಂಧ್ಯಾ ಎಲ್. ನಾಯಕ್
ಸರ್ಕಾರದ ಉಪ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

| ಜಿಲ್ಲಾವಾರು ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆ ಮತ್ತು ಎನ್.ಪಿ.ಎಸ್ ಟ್ರೇಡ್ರಸ್ಸ್ ಯೋಜನೆಗಳಡಿ ಸಾಧನೆ ದಿನಾಂಕ: 18/09/2020ರವರೆಗೆ ಅನುಬಂಧ-5 | | |
|---|---|---|
| ಕ್ರ ಸಂ | ಜಿಲ್ಲೆಯ ಹೆಸರು | ಪಿ.ಎಂ-ಎಸ್.ವೈ.ಎಂ |
| | | ಸಾಧನೆ |
| 1 | ಬಾಗಲಕೋಟೆ | 2651 |
| 2 | ಬೆಳಗಾವಿ | 5638 |
| 3 | ಬಳ್ಳಾರಿ | 3657 |
| 4 | ಬೆಂಗಳೂರು ಗ್ರಾಮಾಂತರ | 2226 |
| 5 | ಬೆಂಗಳೂರು ನಗರ | 5687 |
| 6 | ಬೀದರ್ | 3358 |
| 7 | ಚಾಮರಾಜನಗರ | 1684 |
| 8 | ಚಿಕ್ಕಬಳ್ಳಾಪುರ | 2648 |
| 9 | ಚಿಕ್ಕಮಗಳೂರು | 1557 |
| 10 | ಚಿತ್ರದುರ್ಗ | 3536 |
| 11 | ದಕ್ಷಿಣಕನ್ನಡ | 6850 |
| 12 | ದಾವಣಗೆರೆ | 2905 |
| 13 | ಧಾರವಾಡ | 2260 |
| 14 | ಗದಗ | 2646 |
| 15 | ಹಾಸನ | 2475 |
| 16 | ಹಾವೇರಿ | 2693 |
| 17 | ಕಲಬುರ್ಗಿ | 3049 |
| 18 | ಕೊಡಗು | 1075 |
| 19 | ಕೋಲಾರ | 2321 |
| 20 | ಕೊಪ್ಪಳ | 2668 |
| 21 | ಮಂಡ್ಯ | 2798 |
| 22 | ಮೈಸೂರು | 3670 |
| 23 | ರಾಯಚೂರು | 3321 |
| 24 | ರಾಮನಗರ | 1644 |
| 25 | ಶಿವಮೊಗ್ಗ | 4191 |
| 26 | ತುಮಕೂರು | 4034 |
| 27 | ಉಡುಪಿ | 4467 |
| 28 | ಉತ್ತರ ಕನ್ನಡ | 4952 |
| 29 | ವಿಜಯಪುರ | 2799 |
| 30 | ಯಾದಗಿರಿ | 2085 |
| | **Total** | **95545** |